ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 29 ನೇ ಜನವರಿ, 2021

ಮದರಸಗಳಲ್ಲಿನ ಧಾರ್ಮಿಕ ಶಿಕ್ಷಣದ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನ ಸಭೆಯಿಂದ ಚುನಾಯಿತರಾದವರು) -

49 (37) ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಮದರಸಗಳಲ್ಲಿನ ಧಾರ್ಮಿಕ ಶಿಕ್ಷಣವನ್ನು ಎಸ್.ಎಸ್.ಎಲ್.ಸಿ.ಗೆ ತತ್ಸಮಾನ ಎಂದು ಪರಿಗಣಿಸುವ ಪ್ರಸ್ತಾವ ಸರ್ಕಾರದ ಮುಂದಿದೆಯೇ; ಇದರಿಂದಾಗಿ ಸಮಾಜದ ಒಂದು ವರ್ಗದ ಜನರನ್ನು ಪ್ರತ್ಯೇಕವೆಂದು ಪರಿಗಣಿಸಿದಂತಾಗಲಿಲ್ಲವೇ; ಅವರನ್ನು ಸಾಮಾನ್ಯ ಶಿಕ್ಷಣದಿಂದ ಮತ್ತು ದೇಶದ ಇತಿಹಾಸ ತಿಳಿದುಕೊಳ್ಳುವುದಕ್ಕೆ ಅಡ್ಡಿ ಉಂಟು ಮಾಡಿದಂತಾಗಲಿಲ್ಲವೇ;

(ಆ) ಮದರಸಗಳಲ್ಲಿನ ಧಾರ್ಮಿಕ ಶಿಕ್ಷಣದಲ್ಲಿ ಯಾವ ಯಾವ ವಿಷಯಗಳ ಕುರಿತು ಬೋಧನೆ ಮಾಡಲಾಗುತ್ತದೆ; ಮದರಸ ಶಿಕ್ಷಣಕ್ಕೆ ಸರ್ಕಾರ ಯಾವ ಯಾವ ರೀತಿಯ ಸೌಲಭ್ಯವನ್ನು ನೀಡುತ್ತದೆ;

(ಇ) ಮುಂದಿನ ದಿನಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಉನ್ನತ ಶಿಕ್ಷಣ ಹಾಗೂ ಸರ್ಕಾರದ ನೇಮಕಾತಿಗಾಗಿ ನಡೆಸಲಾಗುವ ಪರೀಕ್ಷೆಗಳಲ್ಲೂ ಪರಿಗಣಿಸಿ ಅಳವಡಿಸಿಕೊಳ್ಳುವಂತೆ ಸಮಾಜದ ಒಂದು ವರ್ಗ ಒತ್ತಡ ತಂದರೆ ಸರ್ಕಾರದ ನಿಲುವೇನುಮ;

(ಈ) ಮದರಸಗಳಲ್ಲಿನ ಧಾರ್ಮಿಕ ಶಿಕ್ಷಣವನ್ನು ಎಸ್.ಎಸ್.ಎಲ್.ಸಿಗೆ ತತ್ಸಮಾನ ಎಂದು ಪರಿಗಣಿಸಿದ್ದಲ್ಲಿ ಆ ಸಮಾಜ ಪಡೆಯುವ ಶಿಕ್ಷಣವೇ ಶ್ರೇಷ್ಠ, ಸಾಮಾನ್ಯ ಶಿಕ್ಷಣಕ್ಕೆ ಬೆಲೆ ಇಲ್ಲ ಎಂದು ಸಮಾಜದ ಇತರ ವರ್ಗ ಭಾವಿಸಿದ್ದಲ್ಲಿ ಸರ್ಕಾರದ ನಿಲುವೇನು;

(ಉ) ಮದರಸಗಳನ್ನು ಸಾಮಾನ್ಯ ಶಿಕ್ಷಣ ನೀಡುವ ಶಾಲೆಗಳಾಗಿ ಪರಿವರ್ತಿಸುವ ಕುರಿತು ಸರ್ಕಾರದ ನಿಲುವೇನು?